# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಜನವರಿ ೧೪, ೨೦೧೬ (ಪುಷ್ಯ ೨೪, ಶಕ ವರ್ಷ ೧೯೩೭)<br>Bengaluru, Thursday, January 14, 2016 (Pushya 24, Shaka Varsha 1937) | ಸಂಚಿಕೆ ೨<br>Issue 2 |
| --- | --- | --- |


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ಸುಖದೇವ್ ಎಂ. ನಾಯಕ್, ಸರ್ಕಾರದ ಅಪರ ಕಾರ್ಯದರ್ಶಿ–2, ಕಾನೂನು ಇಲಾಖೆ ಇವರ ಗುತ್ತಿಗೆ ಆಧಾರದ ನೇಮಕಾತಿ ಅವಧಿಯನ್ನು ಮೊಟಕುಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 558 ಸಅಸೇ 2011, ದಿನಾಂಕ: 19.12.2011.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 558 ಸಅಸೇ 2011, ದಿನಾಂಕ: 20.06.2012.
3. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 881 ಸಅಸೇ 2013, ದಿನಾಂಕ: 01.01.2014.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಅಧಿಸೂಚನೆಯಲ್ಲಿ ಶ್ರೀ ಸುಖದೇವ್ ಎಂ. ನಾಯಕ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರ ಗುತ್ತಿಗೆ ಅವಧಿಯನ್ನು ದಿನಾಂಕ: 19.12.2011 ರಿಂದ ಜಾರಿಗೆ ಬರುವಂತೆ 2 ವರ್ಷಗಳ ಅವಧಿಗೆ ಅಥವಾ ಅವರು ಹೊಂದಿರುವ ಹುದ್ದೆಗೆ ನಿಯುಕ್ತಿಗೊಳಿಸಲು ಕರ್ನಾಟಕ ಉಚ್ಚ ನ್ಯಾಯಾಲಯದಿಂದ ಅರ್ಹ ಜಿಲ್ಲಾ ನ್ಯಾಯಾಧೀಶರನ್ನು ನೇಮಿಸುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ನೇಮಕ ಮಾಡಲಾಗಿರುತ್ತದೆ.

ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಶ್ರೀ ಸುಖದೇವ್ ಎಂ. ನಾಯಕ್, ಇವರ ಗುತ್ತಿಗೆ ಆಧಾರದ ನೇಮಕಾತಿಗೆ ಸಂಬಂಧಿಸಿದಂತೆ, ಷರತ್ತು ಮತ್ತು ನಿಬಂಧನೆಗಳನ್ನು ನಿಗಧಿಪಡಿಸಲಾಗಿರುತ್ತದೆ.

ಮೇಲೆ ಓದಲಾದ (3)ರ ಅಧಿಸೂಚನೆಯಲ್ಲಿ ಶ್ರೀ ಸುಖದೇವ್ ಎಂ. ನಾಯಕ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ದಿನಾಂಕ: 1.1.2014 ರಿಂದ ಜಾರಿಗೆ ಬರುವಂತೆ ಪುನ: 2 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಸರ್ಕಾರದ ಅಪರ ಕಾರ್ಯದರ್ಶಿ–2 ಹುದ್ದೆಗೆ ತಾತ್ಕಾಲಿಕವಾಗಿ ನೇಮಕ ಮಾಡಲಾಗಿರುತ್ತದೆ. ಹಾಗೂ ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿನ ಷರತ್ತು ನಿಬಂಧನೆಗಳನ್ನೇ ಮುಂದುವರೆದ ಅವಧಿಗೂ ವಿಧಿಸಿ ಆದೇಶಿಸಲಾಗಿರುತ್ತದೆ.

ಪ್ರಸ್ತುತ ಅಪರ ಕಾರ್ಯದರ್ಶಿ–2, ಕಾನೂನು ಇಲಾಖೆ ಹುದ್ದೆಯನ್ನು ಮುಂಬಡ್ತಿ ಮೂಲಕ ಭರ್ತಿ ಮಾಡಲು ಸರ್ಕಾರವು ತೀರ್ಮಾನಿಸಿರುತ್ತದೆ.

ಆದ್ದರಿಂದ ಶ್ರೀ ಸುಖದೇವ್ ಎಂ. ನಾಯಕ್, ಸರ್ಕಾರದ ಅಪರ ಕಾರ್ಯದರ್ಶಿ–2, ಕಾನೂನು ಇಲಾಖೆ ಇವರ ಗುತ್ತಿಗೆ ಅವಧಿಯನ್ನು ಮೊಟಕುಗೊಳಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 299 ಸಲುಸೇ 2014, ಬೆಂಗಳೂರು, ದಿನಾಂಕ: 03ನೇ ಅಕ್ಟೋಬರ್, 2015.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಸುಖದೇವ್ ಎಂ. ನಾಯಕ್, ಸರ್ಕಾರದ ಅಪರ ಕಾರ್ಯದರ್ಶಿ–2, ಕಾನೂನು ಇಲಾಖೆ, ಇವರ ಗುತ್ತಿಗೆ ಆಧಾರದ ತಾತ್ಕಾಲಿಕ ನೇಮಕಾತಿಯ ಅವಧಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮೊಟಕುಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ. (ಸೇವೆಗಳು–6)

**PR. 609**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಆರ್ಥಿಕ ಇಲಾಖೆಯ ಅಧೀನ ಕಾರ್ಯದರ್ಶಿ (ಎಫ್ಆರ್ & ಸಿಸಿ) ಹುದ್ದೆಯನ್ನು ವಿಶೇಷಾಧಿಕಾರಿ (ಎಫ್ಆರ್ & ಸಿಸಿ) ಎಂದು ಮರುಪದನಾಮೀಕರಿಸಿ ಈ ಹುದ್ದೆಗೆ ರಾಜ್ಯ ಲೆಕ್ಕಪತ್ರ ಇಲಾಖೆಯ ಸಹಾಯಕ ನಿಯಂತ್ರಕರ ವೃಂದದ ಅಧಿಕಾರಿಯಾದ ಶ್ರೀ ಕೆ.ಆರ್.ಅವಿನಾಶ್, ಲೆಕ್ಕಾಧಿಕಾರಿ ಇವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** ಆರ್ಥಿಕ ಇಲಾಖೆಯ ಕಡತ ಸಂಖ್ಯೆ: ಆಇ 201 ರಾಲೆಪ 2015.

**ಪ್ರಸ್ತಾವನೆ:**

ಮೇಲೆ ಓದಲಾದ ಕಡತದಲ್ಲಿ ಆರ್ಥಿಕ ಇಲಾಖೆಯ (ಎಫ್ಆರ್ & ಸಿಸಿ) ಯಲ್ಲಿನ ಅಧೀನ ಕಾರ್ಯದರ್ಶಿ ಹುದ್ದೆಯನ್ನು ವಿಶೇಷಾಧಿಕಾರಿ (ಎಫ್ ಆರ್ & ಸಿಸಿ) ಎಂದು ಮರುಪದನಾಮೀಕರಿಸಿ ಈ ಹುದ್ದೆಗೆ ರಾಜ್ಯ ಲೆಕ್ಕಪತ್ರ ಇಲಾಖೆಯ ಸಹಾಯಕ/ಉಪ ನಿಯಂತ್ರಕರು ದರ್ಜೆಯ ಅಥವಾ ರಾಜ್ಯ ಖಜಾನೆ ಇಲಾಖೆಯ ತತ್ಸಮಾನ ವೃಂದದ ಅಧಿಕಾರಿಯನ್ನು ನೇಮಿಸಲು ಹಾಗೂ ಆರ್ಥಿಕ ಇಲಾಖೆಯ ಯೋಜನಾ ಮೇಲ್ವಿಚಾರಣಾ ಘಟಕದಲ್ಲಿ ತಾತ್ಕಾಲಿಕವಾಗಿ ಸೃಜಿಸಿ ಮುಂದುವರೆಸಲಾಗುತ್ತಿರುವ ಹುದ್ದೆಗಳಲ್ಲಿ ಒಂದಾದ ಲೆಕ್ಕಾಧಿಕಾರಿ ಹುದ್ದೆಯನ್ನು ಅಧೀನ ಕಾರ್ಯದರ್ಶಿ (ಯೋಜನಾ ಮೇಲ್ವಿಚಾರಣಾ ಘಟಕ) ಎಂದು ಮರುಪದನಾಮೀಕರಿಸಿ, ಸದರಿ ಹುದ್ದೆಗೆ ಸಚಿವಾಲಯದ ಅಧೀನ ಕಾರ್ಯದರ್ಶಿ ವೃಂದದ ಅಧಿಕಾರಿಗಳಿಂದಲೇ ಭರ್ತಿ ಮಾಡಬಹುದೆಂದು ಅಭಿಪ್ರಾಯಿಸಿರುತ್ತಾರೆ.

ಮುಂದುವರೆದು, ಈ ರೀತಿ ಮರುಪದನಾಮೀಕರಿಸಲಾಗುವ ಆರ್ಥಿಕ ಇಲಾಖೆಯ ವಿಶೇಷಾಧಿಕಾರಿ (ಎಫ್ಆರ್ & ಸಿಸಿ) ಹುದ್ದೆಗೆ ಶ್ರೀ ಕೆ.ಆರ್.ಅವಿನಾಶ್, ಸಹಾಯಕ ನಿಯಂತ್ರಕರು, ಲೆಕ್ಕಾಧಿಕಾರಿ, ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ ಇವರನ್ನು ನೇಮಿಸಬೇಕೆಂದು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 404 ಸಲುಸೇ 2015, ಬೆಂಗಳೂರು, ದಿನಾಂಕ: 19.09.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆರ್ಥಿಕ ಇಲಾಖೆಯಲ್ಲಿನ ಅಧೀನ ಕಾರ್ಯದರ್ಶಿ (ಎಫ್ ಆರ್ & ಸಿಸಿ) ಹುದ್ದೆಯನ್ನು ವಿಶೇಷಾಧಿಕಾರಿ (ಎಫ್ ಆರ್ & ಸಿಸಿ) ಎಂದು ಮರುಪದನಾಮೀಕರಿಸಿ ಸದರಿ ಹುದ್ದೆಯನ್ನು ರಾಜ್ಯ ಲೆಕ್ಕಪತ್ರ ಇಲಾಖೆಯ ಸಹಾಯಕ/ಉಪ ನಿಯಂತ್ರಕರ ದರ್ಜೆಯ ಅಥವಾ ರಾಜ್ಯ ಖಜಾನೆ ಇಲಾಖೆಯ ತತ್ಸಮಾನ ವೃಂದದ ಅಧಿಕಾರಿಯ ನಿಯೋಜನೆ ಮೂಲಕ ಭರ್ತಿ ಮಾಡುವಂತೆಯೂ ಹಾಗೂ ಆರ್ಥಿಕ ಇಲಾಖೆಯಲ್ಲಿನ ಲೆಕ್ಕಾಧಿಕಾರಿ (ಯೋಜನಾ ಮೇಲ್ವಿಚಾರಣಾ ಘಟಕ) ಹುದ್ದೆಯನ್ನು ಅಧೀನ ಕಾರ್ಯದರ್ಶಿ, (ಯೋಜನಾ ಮೇಲ್ವಿಚಾರಣಾ ಘಟಕ) ಎಂದು ಮರುಪದನಾಮೀಕರಿಸಿ ಸದರಿ ಹುದ್ದೆಯನ್ನು ಸಚಿವಾಲಯದ ಅಧೀನ ಕಾರ್ಯದರ್ಶಿ ವೃಂದದ ಅಧಿಕಾರಿಗಳಿಂದಲೇ ಭರ್ತಿ ಮಾಡತಕ್ಕದ್ದೆಂದು ಆದೇಶಿಸಿದೆ.

ಮುಂದುವರೆದು, ಮರುಪದನಾಮೀಕರಿಸಲಾದ ವಿಶೇಷಾಧಿಕಾರಿ (ಎಫ್ಆರ್ & ಸಿಸಿ), ಆರ್ಥಿಕ ಇಲಾಖೆ ಹುದ್ದೆಗೆ ಶ್ರೀ ಕೆ.ಆರ್.ಅವಿನಾಶ್, ಸಹಾಯಕ ನಿಯಂತ್ರಕರು, ಲೆಕ್ಕಾಧಿಕಾರಿ, ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ ಇವರನ್ನು ಮರುಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ,**

ಸರ್ಕಾರದ ಅಧೀನ ಕಾರ್ಯದರ್ಶಿ,

PR. 599 ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ. (ಸೇವೆಗಳು–6)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ನಾಗೇಂದ್ರ ಕುಮಾರ್, ನಿರ್ದೇಶಕರು, ಪಠ್ಯ ಪುಸ್ತಕ ಸಂಘ, ಸಾರ್ವಜನಿಕ ಶಿಕ್ಷಣ ಇಲಾಖೆ (ಹಿಂದಿನ ಉಪ ನಿರ್ದೇಶಕರು (ಆಡಳಿತ), ಸಾರ್ವಜನಿಕ ಶಿಕ್ಷಣ ಇಲಾಖೆ, ಎನ್.ಆರ್.ಮೊಹಲ್ಲಾ, ಮೈಸೂರು) ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 14–ಎ ರಡಿ ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ:**

1. ಉಪ ನಿಬಂಧಕರು, ವಿಚಾರಣೆಗಳು–4, ಕರ್ನಾಟಕ ಲೋಕಾಯುಕ್ತ ಇವರ ಅ.ಸ.ಪತ್ರ ಸಂಖ್ಯೆ: ಕಂಪ್ಲೇಂಟ್/ಉಪಲೋಕ್/ಎಂವೈಎಸ್–275/2009/ಡಿಆರ್ಇ–4, ದಿನಾಂಕ: 02.05.2015.
2. ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಇಡಿ 20 ಡಿಜಿಪಿ 2015, ದಿನಾಂಕ: 19.08.2015.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿ ಉಪ ನಿಬಂಧಕರು, ವಿಚಾರಣೆಗಳು–4, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಸರ್ಕಾರಕ್ಕೆ ಕರ್ನಾಟಕ ಲೋಕಾಯುಕ್ತ ಕಾಯ್ದೆ, 1984ರ ಕಲಂ–12(3) ರನ್ವಯ ವರದಿಯನ್ನು ಸಲ್ಲಿಸಿದ್ದು, ಸದರಿ ವರದಿಯಲ್ಲಿ ಶ್ರೀ ನಾಗೇಂದ್ರ ಕುಮಾರ್, ಉಪ ನಿರ್ದೇಶಕರು (ಆಡಳಿತ), ಸಾರ್ವಜನಿಕ ಶಿಕ್ಷಣ ಇಲಾಖೆ, ಎನ್.ಆರ್.ಮೊಹಲ್ಲಾ, ಮೈಸೂರು (ಪ್ರಸ್ತುತ ನಿರ್ದೇಶಕರು, ಪಠ್ಯಪುಸ್ತಕ ಸಂಘ ಶಿಕ್ಷಣ ಇಲಾಖೆ, ಬೆಂಗಳೂರು) ಇವರ ವಿರುದ್ಧ ಶ್ರೀ ಕೆ. ಮಹದೇವ, ನಂಜನಗೂಡು, ಮೈಸೂರು ಜಿಲ್ಲೆ ಇವರು ಸಲ್ಲಿಸಿದ ದೂರನ್ನು ತನಿಖೆ ನಡೆಸಿ ಈ ಕೆಳಕಂಡ ಆರೋಪಗಳು ಮೇಲ್ನೋಟಕ್ಕೆ ಕಂಡುಬಂದಿರುವುದಾಗಿ ವರದಿಯಲ್ಲಿ ತಿಳಿಸಲಾಗಿದೆ.

> `` Prima facie shows that the respondent has failed to perform his duty properly and has thus, failed to maintain absolute integrity, devotion to duty and acted in a manner unbecoming of a Government servant and thereby committed grave misconduct U/S 3(1) (i) to (iii) of KCS (conduct) Rules and made himself liable for disciplinary action.''

ಉಪ ನಿಬಂಧಕರು, ವಿಚಾರಣೆಗಳು–4, ಕರ್ನಾಟಕ ಲೋಕಾಯುಕ್ತ, ಇವರು ಸಲ್ಲಿಸಿರುವ ವರದಿಯನ್ನು ಪರಿಶೀಲಿಸಿ, ಶ್ರೀ ನಾಗೇಂದ್ರ ಕುಮಾರ್, ಉಪ ನಿರ್ದೇಶಕರು (ಆಡಳಿತ), ಸಾರ್ವಜನಿಕ ಶಿಕ್ಷಣ ಇಲಾಖೆ, ಎನ್.ಆರ್. ಮೊಹಲ್ಲಾ, ಮೈಸೂರು (ಪ್ರಸ್ತುತ ನಿರ್ದೇಶಕರು, ಪಠ್ಯಪುಸ್ತಕ ಸಂಘ, ಶಿಕ್ಷಣ ಇಲಾಖೆ ಬೆಂಗಳೂರು) ಇವರ ವಿರುದ್ಧದ ಮೇಲ್ನೋಟದ ಆರೋಪಗಳಿಗೆ ಸಂಬಂಧಿಸಿದಂತೆ, ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯುವುದಕ್ಕಾಗಿ ಪ್ರಕರಣವನ್ನು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 14(ಎ) ಅನ್ವಯ ಇಲಾಖಾ ವಿಚಾರಣೆಯನ್ನು ನಡೆಸಲು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸುವುದು ಸೂಕ್ತವೆಂದು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 108 ಸೇಇಮು 2015, ದಿನಾಂಕ: 30.09.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಶ್ರೀ ನಾಗೇಂದ್ರ ಕುಮಾರ್, ನಿರ್ದೇಶಕರು, ಪಠ್ಯ ಪುಸ್ತಕ ಸಂಘ, ಸಾರ್ವಜನಿಕ ಶಿಕ್ಷಣ ಇಲಾಖೆ (ಹಿಂದಿನ ಉಪ ನಿರ್ದೇಶಕರು (ಆಡಳಿತ), ಸಾರ್ವಜನಿಕ ಶಿಕ್ಷಣ ಇಲಾಖೆ, ಎನ್.ಆರ್.ಮೊಹಲ್ಲಾ, ಮೈಸೂರು) ಇವರ ವಿರುದ್ಧದ ಗೌರವಾನ್ವಿತ ಉಪಲೋಕಾಯುಕ್ತರವರ ಕರ್ನಾಟಕ ಲೋಕಾಯುಕ್ತ ಕಾಯ್ದೆ, 1984ರ ಕಲಂ–12(3)ರ ವರದಿಯಲ್ಲಿನ ಆರೋಪಗಳ ಕುರಿತು ಇಲಾಖಾ ವಿಚಾರಣೆಯನ್ನು ನಡೆಸಲು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 14(ಎ)ರನ್ವಯ ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ: ಗೀತಾ. ಎಲ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ. (ಸೇವೆಗಳು–3)

**PR. 643**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯ ಕಾನೂನು ಇಲಾಖೆಯ ವಿಶೇಷ ಕಾರ್ಯದರ್ಶಿ (ಅಂತರರಾಜ್ಯ ಜಲವಿವಾದ) ಹುದ್ದೆಯನ್ನು ತಾತ್ಕಾಲಿಕವಾಗಿ ಅಪರ ಕಾರ್ಯದರ್ಶಿ (ಅಂತರರಾಜ್ಯ ಜಲವಿವಾದ) ಹುದ್ದೆಯಾಗಿ ನಿಮ್ನೀಕರಿಸುವ ಬಗ್ಗೆ.

**ಉಲ್ಲೇಖ:** ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆ ಸಂಖ್ಯೆ: GoB(I)1/2015, ದಿನಾಂಕ: 08.10.2015.

**ಪ್ರಸ್ತಾವನೆ:**

ಮೇಲೆ ಓದಲಾದ ಅಧಿಸೂಚನೆಯಲ್ಲಿ ಶ್ರೀಮತಿ ಬಿ.ಎಸ್. ಭಾರತಿ, 4ನೇ ಹೆಚ್ಚುವರಿ ಪ್ರಧಾನ ನ್ಯಾಯಾಧೀಶರು ಕೌಟುಂಬಿಕ ನ್ಯಾಯಾಲಯ, ಬೆಂಗಳೂರು ಇವರನ್ನು ಕಾನೂನು ಇಲಾಖೆಯ ಸರ್ಕಾರದ ಅಪರ ಕಾರ್ಯದರ್ಶಿ ಹುದ್ದೆಗೆ ನಿಯೋಜಿಸಲಾಗಿರುತ್ತದೆ. ಆದರೆ ಪ್ರಸ್ತುತ ಕಾನೂನು ಇಲಾಖೆಯಲ್ಲಿ ಅಪರ ಕಾರ್ಯದರ್ಶಿ ಹುದ್ದೆಯ ಖಾಲಿಯಿರುವುದಿಲ್ಲ. ಆದರೆ ಅವರ ಸೇವೆಯನ್ನು ಬಳಸಿಕೊಳ್ಳುವ ಉದ್ದೇಶದಿಂದ ಪ್ರಸ್ತುತ ಕಾನೂನು ಇಲಾಖೆಯಲ್ಲಿ ಖಾಲಿಯಿರುವ ವಿಶೇಷ ಕಾರ್ಯದರ್ಶಿ ಹುದ್ದೆಗೆ ಶ್ರೀ ಹೆಚ್.ಕೆ. ಜಗದೀಶ್, ಸರ್ಕಾರದ ಅಪರ ಕಾರ್ಯದರ್ಶಿ, ಕಾನೂನು ಇಲಾಖೆ ಇವರಿಗೆ ಸ್ಥಾನಪನ್ನ ಬಡ್ತಿ ನೀಡಿದ ನಂತರ ತೆರವಾಗುವ ಹುದ್ದೆಗೆ ಶ್ರೀಮತಿ ಬಿ.ಎಸ್. ಭಾರತಿ, ಜಿಲ್ಲಾ ನ್ಯಾಯಾಧೀಶರು ಇವರನ್ನು ನೇಮಿಸುವಂತೆ ಕಾನೂನು ಇಲಾಖೆಯು ಪ್ರಸ್ತಾಪಿಸಿರುತ್ತದೆ.

ಶ್ರೀ ಹೆಚ್.ಕೆ. ಜಗದೀಶ್ ಸರ್ಕಾರದ ಅಪರ ಕಾರ್ಯದರ್ಶಿ, ಕಾನೂನು ಇಲಾಖೆ ಇವರಿಗೆ ವಿಶೇಷ ಕಾರ್ಯದರ್ಶಿ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡುವ ಸಂಬಂಧ ಪರಿಶೀಲಿಸಲು ಸಮಯಾವಕಾಶದ ಅವಶ್ಯಕತೆಯಿರುವುದರಿಂದ ಪ್ರಸ್ತುತ ಕಾನೂನು ಇಲಾಖೆಯಲ್ಲಿ ಖಾಲಿಯಿರುವ ವಿಶೇಷ ಕಾರ್ಯದರ್ಶಿ (ಅಂತರರಾಜ್ಯ ಜಲವಿವಾದ) ಹುದ್ದೆಯನ್ನು ತಾತ್ಕಾಲಿಕವಾಗಿ ಅಪರ ಕಾರ್ಯದರ್ಶಿ (ಅಂತರರಾಜ್ಯ ಜಲವಿವಾದ) ಹುದ್ದೆಯನ್ನಾಗಿ ನಿಮ್ನೀಕರಿಸಿ ಆ ಹುದ್ದೆಗೆ ಶ್ರೀ ಮಹಮ್ಮದ್ ಇಸ್ಮಾಯಿಲ್, ಸರ್ಕಾರದ ಅಪರ ಕಾರ್ಯದರ್ಶಿ–2, ಕಾನೂನು ಇಲಾಖೆ ಇವರನ್ನು ವರ್ಗಾಯಿಸಿ ಇವರ ವರ್ಗಾವಣೆಯಿಂದ ತೆರವಾಗುವ ಹುದ್ದೆಗೆ ಶ್ರೀಮತಿ ಬಿ.ಎಸ್.ಭಾರತಿ, ಜಿಲ್ಲಾ ನ್ಯಾಯಾಧೀಶರು ಇವರನ್ನು ಮರುಸ್ಥಳ ನಿಯುಕ್ತಿಗೊಳಿಸಲು ಪ್ರಸ್ತಾಪಿಸಿರುವ ಅಂಶವನ್ನು ಪರಿಶೀಲಿಸಿದ ಸರ್ಕಾರವು ವಿಶೇಷ ಕಾರ್ಯದರ್ಶಿ (ಅಂತರರಾಜ್ಯ ಜಲವಿವಾದ) ಹುದ್ದೆಯನ್ನು ತಾತ್ಕಾಲಿಕವಾಗಿ ಅಪರ ಕಾರ್ಯದರ್ಶಿ (ಅಂತರರಾಜ್ಯ ಜಲವಿವಾದ) ಹುದ್ದೆಯನ್ನಾಗಿ ನಿಮ್ನೀಕರಿಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 444 ಸಲುಸೇ 2015, ಬೆಂಗಳೂರು, ದಿನಾಂಕ: 20ನೇ ಅಕ್ಟೋಬರ್, 2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕಾನೂನು ಇಲಾಖೆಯಲ್ಲಿ ಖಾಲಿಯಿರುವ ವಿಶೇಷ ಕಾರ್ಯದರ್ಶಿ (ಅಂತರರಾಜ್ಯ ಜಲವಿವಾದ) ಹುದ್ದೆಯನ್ನು ತಾತ್ಕಾಲಿಕವಾಗಿ ಅಪರ ಕಾರ್ಯದರ್ಶಿ (ಅಂತರರಾಜ್ಯ ಜಲವಿವಾದ) ಹುದ್ದೆಯನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಿಮ್ನೀಕರಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಸರ್ಕಾರದ ಕಾರ್ಯದರ್ಶಿ (ವೆಚ್ಚ), ಆರ್ಥಿಕ ಇಲಾಖೆ ಇವರು ದಿನಾಂಕ: 19.10.2015ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ: ಗೀತಾ. ಎಲ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ. (ಸೇವೆಗಳು–3)

**PR. 682**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ನೇರ ನೇಮಕಾತಿಯಲ್ಲಿ ಇತರೆ ಹಿಂದುಳಿದ ವರ್ಗಗಳ ಅಭ್ಯರ್ಥಿಗಳ ಕೊರತೆಯಿಂದ ಭರ್ತಿಯಾಗದೇ ಉಳಿದ ರಿಕ್ತ ಸ್ಥಾನಗಳನ್ನು ಬ್ಯಾಕ್‌ಲಾಗ್ ಎಂದು ಪರಿಗಣಿಸುವ ಬಗ್ಗೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 3 ಸೆಹಿಮ 2015, ಬೆಂಗಳೂರು, ದಿನಾಂಕ: 03.10.2015.**

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 19 ಎಸ್‌ಬಿಸಿ 89 ದಿನಾಂಕ: 12.07.1989
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 8 ಸೆಹಿಮ 1995 ದಿನಾಂಕ: 20.06.1995.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಸೆಹಿಮ 2014, ದಿನಾಂಕ: 05.02.2015.
4. 14ನೇ ವಿಧಾನ ಸಭೆಯ ಎರಡನೇ ವರದಿಯಲ್ಲಿ ವಿಧಾನ ಮಂಡಲದ ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತರ ಕಲ್ಯಾಣ ಸಮಿತಿಯು ಮಾಡಿರುವ ಶಿಫಾರಸ್ಸುಗಳು.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಅವರಿಗಾಗಿ ಮೀಸಲಿರಿಸಿದ ರಿಕ್ತ ಸ್ಥಾನಗಳನ್ನು ಬ್ಯಾಕ್‌ಲಾಗ್ ಎಂದು ಪರಿಗಣಿಸಲು ಆದೇಶಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ: 20.06.1995ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 8 ಸೆಹಿಮ 95 ರಲ್ಲಿ ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ಮಾಡುವ ನೇರ ನೇಮಕಾತಿಯಲ್ಲಿ ಭಾರತ ಸಂವಿಧಾನದ ಅನುಚ್ಛೇದ 16(4) ರ ಪ್ರಕಾರ ಇತರೆ ಹಿಂದುಳಿದ ವರ್ಗಗಳಿಗೆ ಅಳವಡಿಸಿಕೊಳ್ಳಬೇಕಾದ ಮೀಸಲಾತಿ ವಿಧಾನ ಮತ್ತು ಅದಕ್ಕಾಗಿ ಅನುಸರಿಸಬೇಕಾದ ರೋಸ್ಟರ್‌ನ್ನು ನಿಗಧಿಪಡಿಸಲಾಗಿದೆ. ಈ ಆದೇಶದಲ್ಲಿ ಇತರೆ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಗುರುತಿಸಲ್ಪಟ್ಟ ರಿಕ್ತ ಸ್ಥಾನಗಳಿಗೆ ಆಯಾ ವರ್ಗದ ಅರ್ಹ ಅಭ್ಯರ್ಥಿಗಳ ಲಭ್ಯತೆಯಲ್ಲಿನ ಕೊರತೆಯಿಂದಾಗಿ ಭರ್ತಿ ಮಾಡಲಾಗದ ರಿಕ್ತ ಸ್ಥಾನಗಳನ್ನು ಸಾಮಾನ್ಯ ವರ್ಗದ ಅಭ್ಯರ್ಥಿಗಳಿಂದ ಭರ್ತಿ ಮಾಡತಕ್ಕದೆಂದು ಮತ್ತು ಈ ರೀತಿ ನಷ್ಟಗೊಂಡ ರಿಕ್ತ ಸ್ಥಾನಗಳನ್ನು ಮುಂದಿನ ಮತ್ತು ತದನಂತರದ 2 ಕ್ಯಾಲೆಂಡರ್ ವರ್ಷಗಳಿಗೆ ಮುಂದಕ್ಕೆ ಕೊಂಡೊಯ್ಯತಕ್ಕದೆಂದು ಆದೇಶಿಸಲಾಗಿರುತ್ತದೆ.

ಮೇಲೆ (3)ರಲ್ಲಿ ಓದಲಾಗಿರುವ ಆದೇಶದಲ್ಲಿ ಇತರೆ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಗುರುತಿಸಲ್ಪಟ್ಟ ರಿಕ್ತ ಸ್ಥಾನಗಳಿಗೆ ಅರ್ಹ ಅಭ್ಯರ್ಥಿಗಳ ಲಭ್ಯತೆಯಲ್ಲಿನ ಕೊರತೆಯಿಂದಾಗಿ ಭರ್ತಿ ಮಾಡಲಾಗದ ರಿಕ್ತ ಸ್ಥಾನಗಳನ್ನು "ಮೂರು ನೇಮಕಾತಿಯವರೆಗೆ ಅಥವಾ ಗರಿಷ್ಠ 5 ಕ್ಯಾಲೆಂಡರ್ ವರ್ಷಗಳವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ" ಮುಂದುವರೆಸಲು ಆದೇಶಿಸಲಾಗಿದೆ.

ಭಾರತ ಸಂವಿಧಾನದ ಅನುಚ್ಛೇದ 16(4ಬಿ) ಈ ಕೆಳಕಂಡಂತಿದೆ.

> `` (4B) Nothing in this article shall prevent the State from considering any unfilled vacancies of a year which are reserved for being filled up in that year in accordance with any provision for reservation made under clause (4) or clause (4A) as a separate class of vacancies to be filled up in any succeeding year or years and such class of vacancies shall not be considered together with vacancies of the year in which they are being filled up for determining the celling of fifty percent reservation on total number of vacancies of that year.''

ಮೇಲೆ (4)ರಲ್ಲಿ ಓದಲಾದ 14ನೇ ವಿಧಾನ ಸಭೆಯ ಎರಡನೇ ವರದಿಯಲ್ಲಿ ವಿಧಾನ ಮಂಡಲದ ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತರ ಕಲ್ಯಾಣ ಸಮಿತಿಯು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಅಭ್ಯರ್ಥಿಗಳು ನೇಮಕಾತಿಯಲ್ಲಿ ಲಭ್ಯವಿಲ್ಲದಿದ್ದಾಗ ಅವರಿಗಾಗಿ ರಿಕ್ತ ಸ್ಥಾನಗಳನ್ನು ಮೀಸಲಾತಿಯಿಂದ ವಿಮುಕ್ತಿಗೊಳಿಸದೆ ಕಾಯ್ದಿರಿಸುವ ಬ್ಯಾಕ್‌ಲಾಗ್ ನೀತಿಯನ್ನು ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತ ವರ್ಗದ ಅಭ್ಯರ್ಥಿಗಳು ಅಲಭ್ಯರಾದ ಸಂದರ್ಭದಲ್ಲಿಯೂ ಅನ್ವಯಿಸಿ ಬ್ಯಾಕ್‌ಲಾಗ್ ನೀತಿಯನ್ನು ಜಾರಿಗೆ ತರಲು ಶಿಫಾರಸ್ಸು ಮಾಡಿರುತ್ತದೆ.

ಈ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 8 ಸೆಹಿಮ 1995, ದಿನಾಂಕ: 20.06.1995ನ್ನು ಮಾರ್ಪಡಿಸಿ ಆದೇಶ ಭಾಗದಲ್ಲಿನ ಕಂಡಿಕೆ 7, 8 ಮತ್ತು 9 ಗಳ ಬದಲಿಗೆ ಈ ಕೆಳಕಂಡ ಕಂಡಿಕೆಗಳನ್ನು ಪ್ರತಿಷ್ಠಾಪಿಸಿ ಆದೇಶಿಸಿದೆ.

"7. ಇತರೆ ಹಿಂದುಳಿದ ವರ್ಗಗಳಿಗೆ ಗುರುತಿಸಲ್ಪಟ್ಟ ಆದರೆ ಆಯಾ ಪ್ರವರ್ಗಗಳ ಅರ್ಹ ಅಭ್ಯರ್ಥಿಗಳ ಲಭ್ಯತೆಯ ಕೊರತೆಯಿಂದಾಗಿ ಭರ್ತಿ ಮಾಡಲಾಗದ ರಿಕ್ತ ಸ್ಥಾನಗಳನ್ನು ಬ್ಯಾಕ್ ಲಾಗ್ ಎಂದು ಪರಿಗಣಿಸಿ ಮುಂದಕ್ಕೆ ಕೊಂಡೊಯ್ಯತಕ್ಕದ್ದು. ಈ ರಿಕ್ತ ಸ್ಥಾನಗಳನ್ನು ಮೀಸಲಾತಿಯಿಂದ ವಿಮುಕ್ತಿಗೊಳಿಸುವಂತಿಲ್ಲ.

8. ಮುಂದಿನ ನೇರನೇಮಕಾತಿ ಸಂದರ್ಭದಲ್ಲಿ ಹೊಸ ರಿಕ್ತ ಸ್ಥಾನಗಳನ್ನು ಮತ್ತು ಬ್ಯಾಕ್‌ಲಾಗ್ ರಿಕ್ತ ಸ್ಥಾನಗಳ ಪಟ್ಟಿಯನ್ನು ಪ್ರತ್ಯೇಕವಾಗಿ ಪ್ರಕಟಿಸತಕ್ಕದ್ದು.

9. ಹೊಸ ರಿಕ್ತ ಸ್ಥಾನಗಳನ್ನು ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳನ್ವಯ ವರ್ಗೀಕರಣ ಮಾಡಿ ಪ್ರಕಟಿಸುವುದು. ಬ್ಯಾಕ್‌ಲಾಗ್ ರಿಕ್ತ ಸ್ಥಾನಗಳನ್ನು ಮತ್ತೊಮ್ಮೆ ವರ್ಗೀಕರಣ ಮಾಡುವಂತಿಲ್ಲ."

ದಿನಾಂಕ: 05.02.2015ರ ಆದೇಶದಲ್ಲಿ ತಿಳಿಸಿರುವಂತೆ ನೇರ ನೇಮಕಾತಿಯಲ್ಲಿ ಇತರೆ ಹಿಂದುಳಿದ ವರ್ಗಗಳ ಅರ್ಹ ಅಭ್ಯರ್ಥಿಗಳ ಕೊರತೆಯಿಂದ ಭರ್ತಿಮಾಡದೇ ಮುಂದಕ್ಕೆ ಕೊಂಡೊಯ್ಯಲಾದ ರಿಕ್ತ ಸ್ಥಾನಗಳಿಗೂ ಈ ಆದೇಶ ಅನ್ವಯಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ: ಮಂಗಳ ಜಿ.ಎಸ್.,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ. (ಸೇವಾ ನಿಯಮಗಳು–1)

**PR. 616**

**SC.1,000**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59